**ಬೇರೊಂದು ಹೆಸರಿನ ಶಾಲೆ.....**

ಮೂಲ: ರಾಹುಲ್ ಮುಖೋಪಾಧ್ಯಾಯ್ ಮತ್ತು ಅರ್ಚನ ಮೆಹೆಂದಳೇ

ವಿಶ್ವದರ್ಜೆಯ ವಿಶ್ವವಿದ್ಯಾಲಯಗಳು ಭಾರತದಲ್ಲಿ ನಮಗೆ ದೂರದ ಕನಸಿರಬಹುದು, ಆದರೆ, ನಮ್ಮ ಸುತ್ತಲಿನ ಪ್ರಪಂಚವಾದರೋ ಆಕ್ಸ್ಪರ್ಡ್ , ಕೇಂಬ್ರಿಡ್ಜ್ ಮತ್ತು ಸ್ಟಾನ್ಫರ್ಡ್ ಇವುಗಳಿಂದ ತುಂಬಿಹೋಗಿದೆ. ತಮ್ಮ ಅನನ್ಯತೆಗಳನ್ನ ಅವು ಸಾರುವುದು ಅವುಗಳ ಪ್ರತ್ಯೇಕತೆಯಿಂದಲ್ಲ, ಅವುಗಳ ಸಂಖ್ಯಾ ಹೆಚ್ಚಳದಿಂದ. ಶಾಲೆಗಳ ಈ ಕ್ಷೇತ್ರವಾದರೋ ಇಂದಿನ ಕಾಲಮಾನ, ಸ್ಥಿತಿಗತಿಗೆ ಹೊಂದದ ಸಾರ್ವಜನಿಕ ನಾಯಕರು/ವ್ಯಕ್ತಿಗಳ ಹೆಸರಿನಿಂದ ಹರಡಿದೆ - ವಿವೇಕಾನಂದ, ಮಾರ್ಟಿನ್ ಲೂಥರ್, ಮ್ಯಾಕ್ಸ್ ಮುಲ್ಲರ್, ಅರಬಿಂದೋ, ನೇತಾಜೀ ಸುಭಾಷ್ ಚಂದ್ರ ಬೋಸ್. ಇಂದಿರಾ ಪ್ರಿಯದರ್ಶಿನಿ, ನೆಹರು, ಮದರ್ ಥೆರೆಸಾ, ಐಸ್ಯಾಕ್ ನ್ಯೂಟನ್, ಆಲ್ಪ್ರೆಡ್ ನೋಬೆಲ್, ರಾಜೀವ ಗಾಂಧಿ, ಆ್ಯನೀ ಬೆಸೆಂಟ್ ಅಷ್ಟೇ ಅಲ್ಲ, ನಮ್ಮ 'ಶಿಕ್ಷಣ ಮಾಧ್ಯಮ'ದ ಇಕ್ಕಟ್ಟಿಗೆ ಮೂಲ ಪುರುಷನಾದ (ವ್ಯಂಗ್ಯಾತ್ಮಕವಾಗಿ) ಮೆಕಾಲೆಯ ಹೆಸರೂ ಇದೆ. ಹೌದು! ಇವೆಲ್ಲವೂ ಬೆಂಗಳೂರು ನಗರ ಮತ್ತು ಸುತ್ತಲಿನ ಪರಿಸರದಲ್ಲಿ ಹರಡಿರುವ ಶಾಲೆಗಳ ಹೆಸರುಗಳು, ಇತ್ತೀಚಿನ ಒಂದು ಅಧ್ಯಯನದಲ್ಲಿ ಇವೆಲ್ಲ ಕಂಡು ಬಂತು.

'ಜಾಗತೀಕರಣ'ವು ಇನ್ನೂ ತಳಮಟ್ಟದಲ್ಲಿ ತನ್ನೆಲ್ಲ ಪರಿಣಾಮಗಳನ್ನು ತೋರದಿದ್ದರೂ, ನಮ್ಮ ದಿನನಿತ್ಯದ ಆಗು ಹೋಗುಗಳಲ್ಲಿ ಅದರ ಸಾಂಕೇತಿಕವಾದ ಸ್ಥಾನವನ್ನು ಅಲ್ಲಗಳೆಯಲಾಗದು. ನಮ್ಮ ಸುತ್ತು ಮುತ್ತಲಿನ ಖಾಸಗೀ ಶಾಲೆಗಳಾದರೂ ಈ ಮನಸ್ಥಿತಿಯನ್ನು ಕಡೆಗಣಿಸುವಷ್ಟು ಮೂರ್ಖರಲ್ಲ. 'ಗ್ಲೋಬಲ್' ಮತ್ತು 'ಇಂಟರ್ನ್ಯಾಷನಲ್' ಎಂಬುವು ಕೇವಲ ಶಾಲೆಯ ಹೆಸರಿನಲ್ಲಿ ಪ್ರತ್ಯಯಗಳಾಗಷ್ಟೇ ಉಳಿದಿಲ್ಲ, ಪೋಷಕರಿಗೆ 'ಜಾಗತೀಕರಣ'ದ ಹೆಬ್ಬಯಕೆಯ ರಹದಾರಿಯಾಗಿಯೂ ಕೂಡ ಕಂಡುಬರುತ್ತವೆ. ಕೆಲವು ಬಾರಿ, ಶಿಕ್ಷಣ ಮಕ್ಕಳನ್ನು 'ಹೊಸ ಸಹಸ್ರಮಾನಕ್ಕೆ' ಶಾಲೆಯಲ್ಲಿ ಹೇಗೆ ತಯಾರಿ ಮಾಡುತ್ತವೆ ಎಂದು ಸೂಚಿಸುವ ಹೆಸರುಗಳಲ್ಲಿ ಈ ಹೆಬ್ಬಯಕೆಗಳು ರೂಪ ಪಡೆಯುತ್ತವೆ - 'ಬ್ರೈಟ್' , 'ಬ್ರಿಲಿಯಂಟ್', 'ಎಕ್ಸಲೆಂಟ್' , 'ಮ್ಯಾಗ್ನಿಫ಼ಿಕ್' (ಇಂಗ್ಲೀಷ್ ಬಗ್ಗೆ ನಮಗಿರುವ ಗೀಳು ಸಾಲದೇನೋ!), ಮತ್ತು 'ಕಾನ್ಫಿಡೆಂಟ್' 'ಫ್ಯೂಚರ್'. ಕೆಲವು ಬಾರಿ, ಕೇವಲ 'ಗ್ಲೋಬಲ್'ನ ಬಲ ಸಾಲದೇನೋ ಎಂದು, ಧಾರ್ಮಿಕತೆ, ರಾಷ್ಟ್ರೀಯತೆಗಳ, ಭಾವನೆಗಳನ್ನೂ ಕೆರಳಿಸುವ ಅವ್ಯಯಗಳನ್ನೂ ಜೊತೆಗೆ ಬಳಸುತ್ತಾರೆ 'ಗುರುಕುಲ್', 'ನ್ಯೂ ಭಾರತ್' ಅಥವಾ 'ಜೈ ಹಿಂದ್' - ನಮ್ಮ ಭವ್ಯ ಪ್ರಾಚೀನತೆ ಮತ್ತು ಸಾಧನೆಗಳನ್ನು ನೆನಪಿಸಲು.

ಈ 'ಗ್ಲೋಬಲ್' ಎಂಬ ಪದವಾದರೋ, ದುರದೃಷ್ಟವಶಾತ್ ನಮ್ಮ ವಸಾಹತು ಮನಸ್ಥಿತಿಯಿಂದ ಹೊರಬರಲು ಸಹಾಯ ಮಾಡುವುದಿಲ್ಲ - ಇತ್ತೀಚಿನ ದಶಕಗಳಲ್ಲಿ ಆರ್ಥಿಕ ಮತ್ತು ಸಾಂಸ್ಕೃತಿಕ 'ಬಂಡವಾಳ'ವಾಗಿರುವ ಭಾಷೆಯ ವಿಷಯದಲ್ಲಿ ಹಾಗೂ ಸಾಂಕೇತಿಕ ವಸಾಹತು ವ್ಯವಸ್ಥೆಯೆರಡರಲ್ಲೂ. ಸರ್ಕಾರದಿಂದ ಕನ್ನಡ ಮಾಧ್ಯಮಕ್ಕೆ ಮಾನ್ಯತೆ ಪಡೆದಿದ್ದರೂ ಸಹಾ ಖಾಸಗೀ ಅನುದಾನ ರಹಿತ ಶಾಲೆಗಳು ಕೂಡ 'ಇಂಗ್ಲೀಷ್' ಇಲ್ಲವೇ 'ಕಾನ್ವೆಂಟ್' ಎಂಬ ಹೆಸರನ್ನಾದರೂ ತಮ್ಮ ನಾಮಕಾವಾಸ್ಥೆ ಹೆಸರಿನ ಪಕ್ಕದಲ್ಲಿ ಸೇರಿಸುತ್ತಾರೆ, ಇಂದಿನ ಮಾರುಕಟ್ಟೆ ಭಾಷೆಯ ವಿರುದ್ಧವಿದ್ದರೂ. ಹಾಗಾಗಿ ಭಾರತದ ಉತ್ಕೃಷ್ಟ ಪರಂಪರೆಯನ್ನು ಎತ್ತಿ ಹಿಡಿಯುವ 'ಭಾರತೀಯ ಸಂಸ್ಕೃತಿ' ಎಂಬ 'ವಿದ್ಯಾಪೀಠ' ವನ್ನು ಕಾಣಲು ಪ್ರಯಾಸ ಪಡಬೇಕಿಲ್ಲ, ಅದರೊಟ್ಟಿಗೆ ಮಾರುಕಟ್ಟೆಗೆ ಅಗತ್ಯವಾದ 'ಇಂಗ್ಲೀಷ್' ಎಂಬ ಪದವನ್ನು ಆ ಶಾಲೆ ಹೆಸರಿನಲ್ಲಿಟ್ಟುಕೊಂಡಿರುತ್ತದೆ. ಹಾಗೆಯೇ ಎಷ್ಟೋ ಖಾಸಗೀ ಶಾಲೆಗಳು 'ಪಬ್ಲಿಕ್ ಶಾಲೆ' ಎಂದು ತಮ್ಮ ಹೆಸರಿನಲ್ಲಿಟ್ಟುಕೊಳ್ಳಲು

ಹೇಸುವುದಿಲ್ಲ, ಅಂತಹ ಶಾಲೆಗಳಲ್ಲಿ 'ಸಾರ್ವಜನಿಕ'ತನವನ್ನು ಅವರ ಚಿಂತನೆ ಅಥವಾ ನಡಾವಳಿಯಲ್ಲಿ ಕಾಣಲು ಸಿಗುವುದಿಲ್ಲ. ಈ 'ಪಬ್ಲಿಕ್' ಪದದ ಉಗಮ ಬ್ರಿಟಿಷ್ ಪಬ್ಲಿಕ್ ಶಾಲಾ ವ್ಯವಸ್ಥೆಯಲ್ಲಿದೆ, ಅಲ್ಲಿ ಸಮಾಜದ ಬೆರಳೆಣಿಕೆಯಷ್ಟು ಗಣ್ಯರಿಗೋಸ್ಕರ ಇರುವ ಖಾಸಗೀ ಶಾಲೆಗಳನ್ನು ಇವು ಸೂಚಿಸುತ್ತವೆ. ವಸಾಹತು ನಂತರದ ದಿನಗಳಲ್ಲಿ, ಕಲಿಕಾ ಮಾಧ್ಯಮದಲ್ಲಿ ಪ್ರಜಾಪ್ರಭುತ್ವವನ್ನು ತರಲಾಗದ ಸರ್ಕಾರ, ನಮ್ಮ ಶಿಕ್ಷಣ ವ್ಯವಸ್ಥೆಯಿಂದ ಇಂತಹ 'ಪ್ರತ್ಯೇಕತೆ'ಯ ಮಾರುಕಟ್ಟೆಗಳನ್ನೂ ಕೂಡ ಅಳಿಸಿಹಾಕಲು ವಿಫಲವಾಯಿತು. .

ನಗರ ಮತ್ತು ಗ್ರಾಮಾಂತರಗಳೆರಡೂ ಎಡೆಗಳಲ್ಲೂ ವೇಗವಾಗಿ ಇಂತಹ ಶಾಲೆಗಳು ಹಬ್ಬುತ್ತಿರುವ ಈ ಸಮಯದಲ್ಲಿ, ದೇಶದ ಉದ್ದಗಲಕ್ಕೂ ಖಾಸಗೀ ಶಾಲೆಗಳು, ಇಂತಹ ತಂತ್ರಗಾರಿಕೆಯ ಹೆಸರುಗಳನ್ನು  ಇತರ ಶಾಲೆಗಳಿಂದ ತಮ್ಮ ಭಿನ್ನತೆಯನ್ನು ಸಾರಲು ಬಳಸುತ್ತಿದ್ದಾರೆ. ಶಿಕ್ಷಣದ ಈ ಹೊಸ ಪೇಟೆಯಲ್ಲಿ ಶಾಲೆಯ ಹೆಸರು ಕೇವಲ ಶಾಲೆಯ ಗುರುತಿನ ಹೆಸರಾಗಷ್ಟೇ ಉಳಿದಿಲ್ಲ. ಶಾಲೆಯ ಗುಣಮಟ್ಟ, ಅದಕ್ಕಿರುವ ಹೆಸರಿನ ದ್ಯೋತಕವಾಗಿ ಉಪಯೋಗಿಸಲ್ಪಡುತ್ತಿದೆ, ಆಶಾಭಾವದಿಂದಿದ್ದೂ ತಬ್ಬಿಬ್ಬಾಗಿರುವ, ಗ್ರಾಹಕ-ಪೋಷಕರನ್ನು ಸೆಳೆಯುವ ಒಂದು ಆಯಧವಾಗಿದೆ.  ಸಾರ್ವಜನಿಕವಾಗಿ ಶಾಲೆಯ ಬಗ್ಗೆ ವ್ಯವಸ್ಥಿತವಾಗಿ, ಪೂರ್ಣವಾದ, ಪಾರದರ್ಶಕವಾದ ಮತ್ತು ನಂಬಲರ್ಹವಾದ ಮಾಹಿತಿಯ ಕೊರತೆ ಇರುವ ಈ ಪರಿಸ್ಥಿತಿಯಲ್ಲಿ, ಶಾಲೆಯ ಹೆಸರೇ, ಶಾಲೆಯ ಗುಣಮಟ್ಟವನ್ನು ಸೂಚಿಸುವ ಒಂದು ಪ್ರತೀಕವಾಗಿದೆ..

ತಮ್ಮ ವಿಶಿಷ್ಟ ಗುಣವನ್ನು ಸೂಚಿಸುವ ಹೆಸರಿನ ಶಾಲೆಗಳ ಅಭಿಲಾಷೆಯೇ ಶಾಲೆಯ ಹೆಸರು ಬಗೆ ಬಗೆಯ ಎಳೆಗಳ ಎಲ್ಲ ಬದಿಗೂ ಚಾಚಿಕೊಂಡಿರುವಂತೆ ಹೆಸರಿಸುವುದಕ್ಕೆ ಕಾರಣವೆನಿಸುತ್ತದೆ. ಆಯ್ಕೆಗಳೋ ಅಸಂಖ್ಯ. 'ಗ್ಲೋಬಲ್' ಎನ್ನುವುದರ ನೇರವಾದ ವಿವಿಧ ರೂಪಾಂತರಗಳು, ಇಲ್ಲವೇ ಜಗತ್ಪ್ರಸಿದ್ಧ ಶಿಕ್ಷಣಸಂಸ್ಥೆಗಳ ಹೆಸರನ್ನು ನೇರವಾಗಿ ಎತ್ತಿಕೊಳ್ಳುವುದು, ರಾಜಕೀಯ ವ್ಯಕ್ತಿಗಳ ಇಲ್ಲವೇ ರಾಜಕೀಯ ಮುತ್ಸದ್ಧಿಗಳು  - ಅದೂ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮತ್ತು ಪಂಗಡಗಳ ಇತ್ಯಾದಿ ವಿವಿಧ ನಂಬಿಕೆ ಮೂಲದ; ಹೀಗೆ. ಖಾಸಗೀ ಶಾಲೆಗಳಿಗೆ ಇರುವ ಇಷ್ಟು ಅಪಾರ ಆಯ್ಕೆಗಳು ಮತ್ತು ಸರ್ಕಾರೀ ಶಾಲೆಗಳು ಉಪಯೋಗಿಸುವ ಜನರ ಒಡೆತನ ತೋರಿಸುವ 'ಸಾರ್ವಜನಿಕ' ಮತ್ತು ಯಾವ 'ಪ್ರದೇಶ'ದಲ್ಲಿದೆಯೋ ಅದರ ಹೆಸರು - ಕೇವಲ ಈ ಎರಡೇ ವಿಶೇಷಣಗಳು; ಇವೆರಡನ್ನೂ ಮುಖಾಮುಖಿಯಾಗಿ ನಿಲ್ಲಿಸಿ ನೋಡಿದಾಗ, ಒಂದೆರಡು ಮುಖ್ಯ ವ್ಯತ್ಯಾಸಗಳು ಎದ್ದು ಕಾಣುತ್ತವೆ.

ಮೊದಲನೆಯದಾಗಿ, ಯಾವುದೇ ಖಾಸಗೀ ಶಾಲೆ 'ಖಾಸಗಿ' ಎಂಬ ವಿಶೇಷಣವನ್ನು ತನ್ನ ಹೆಸರಿನೊಂದಿಗೆ ತಳಕು ಹಾಕಿಕೊಂಡಿಲ್ಲ, ಅಷ್ಟೇ ಅಲ್ಲ, ಅವರ ಖಾಸಗೀತನವನ್ನು 'ಪಬ್ಲಿಕ್' ಎಂಬ ಪದವನ್ನೆತ್ತಿಕೊಳ್ಳುವ ಮೂಲಕ ಮರೆ ಮಾಡಲು ಪ್ರಯತ್ನಿಸುತ್ತವೆ - ಭಾರತದ ಶೈಕ್ಷಣಿಕ ವ್ಯವಸ್ಥೆಯಲ್ಲಿ ಈ ಪದದ ಹುಟ್ಟು ಬೆಳವಣಿಗೆಗಳಾದರೋ ಕಣ್ಣಿಗೆ ಮಣ್ಣೆರಚುವಂತಹುದು. ಇನ್ನೊಂದು ಬದಿಯಲ್ಲಿ, ಸ್ಥಳೀಯ ಸಮುದಾಯಗಳ ಹೊಣೆಗಾರಿಕೆಯಿಂದ ಆರಂಭವಾಗಿ ಕೆಳಗಿನಿಂದ ಮೇಲೇರಬೇಕಿದ್ದ ನಿರ್ವಹಣೆಯು, ಸರ್ಕಾರೀ ಏಕ ಸ್ವಾಮ್ಯದಲ್ಲಿ ಮೇಲಿನಿಂದ ಕೆಳಕ್ಕೆ ಹರಿದುಬಂದು ಹೊಣೆಗಾರಿಕೆಯೇ ಕಳೆದು ಹೋಗಿದೆ. ಎರಡನೆಯದಾಗಿ, ಹೆಸರಿಡಲು ಖಾಸಗೀ ಶಾಲೆಗಳಿಗಿರುವ ಆಯ್ಕೆಗಳಾದರೋ, ಪೇಟೆ ಪ್ರಕ್ರಿಯೆಯಿಂದಾದ ಒಂದು 'ಕಲ್ಪನೆ'ಯಷ್ಟೇ. ಈ ಕಲ್ಪನೆಗಳು ಇಂತಹ ಶಾಲೆಗಳು ಸೃಷ್ಟಿಸುವ ಸಾಮಾಜಿಕ  ಚಿಂತನಾ ಧಾರೆಯಿಂದಾಗಿ ಬಲಗೊಳ್ಳುತ್ತವೆ. ಅಷ್ಟೇ ಅಲ್ಲ, ಶಾಲಾ ಮಾರುಕಟ್ಟೆಯ ಸಮರ್ಥಕರು ಇಂದಿನ ಶಾಲಾ ವ್ಯವಸ್ಥೆಯ ಪುನರುಜ್ಜೀವನಕ್ಕೆ ಅಗತ್ಯ ಎಂದು ಪ್ರತಿಪಾದಿಸುವ ಕಲ್ಪನೆಯೂ ಇದೇ. ಸರ್ಕಾರೀ ಶಾಲೆಗಳಾದರೋ ಯಾವುದೋ ಸಂಸ್ಕೃತಿಗೋ, ವ್ಯಕ್ತಿಗಳಿಗೋ ಇಲ್ಲವೋ ಚರಿತ್ರೆಗಳ ಕಲ್ಪನೆಗಳಿಗೆ ತಳಕು ಹಾಕಿಕೊಳ್ಳುವ ಸಾಧ್ಯತೆಗಳೂ ಇಲ್ಲದೇ, ಒಂದು

‘ಪ್ರದೇಶ’ಕ್ಕೇ ಸೀಮಿತವಾಗಿದ್ದು , ಅಲ್ಲೇ ಉಳಿದು-ಬೆಳೆಯುವ ಅನಿವಾರ್ಯತೆಗೆ ಒಳಪಟ್ಟಿವೆ. ಆದರೆ, ಈ ಕಲ್ಪನೆಗಳಿಲ್ಲದಿರುವುದೇ ಎಲ್ಲರಿಗಾಗಿ ಕಟ್ಟಿದ ಈ ‘ಸಾರ್ವಜನಿಕ’ ಸಂಸ್ಥೆಗಳ ಎಲ್ಲರನ್ನೂ ಒಳಗೊಳ್ಳುವ ಗುಣವೆಂದೂ ಪರಿಗಣಿಸಬಹುದು. ‘ಪ್ರದೇಶದ’ ಎಲ್ಲ ಸಾಧ್ಯತೆಗಳನ್ನೂ ಮುಟ್ಟುವುದು ಪ್ರಾಯಶಃ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಭಗ್ನಗೊಂಡ ಕನಸುಗಳಲ್ಲಿ ಹುದುಗಿ ಹೋದವೇನೋ.

ತಮ್ಮ ಮತ್ತು ತಾವು ಹರಡುವ ‘ಗುಣ’ಗಳಲ್ಲಿ ‘ಪಬ್ಲಿಕ್’ (ಸಾರ್ವಜನಿಕ) ಬಿಟ್ಟು ಬೇರೆಲ್ಲಾ ಆಗಿರುವ ಖಾಸಗೀ ಶಾಲೆಗಳು, ಬಹುಶಃ ಸಾರ್ವಜನಿಕವಾಗಲು ಏನು ಮಾಡಬೇಕೆಂದು ವಿವೇಚಿಸುವ ಕಾಲ ಇದೆನಿಸುತ್ತದೆ, ಆರ್.ಟಿ.ಇ. 2009 ಶೇ 25ರಷ್ಟು ಮಕ್ಕಳು ಆರ್.ಟಿ.ಇ ಮೂಲಕ ಬರಬೇಕೆನ್ನುವಲ್ಲಿ, ಎತ್ತುವುದೂ ಈ ಪ್ರಶ್ನೆಯನ್ನೇ. ಇದೇ ನಿಲುವಿನಲ್ಲಿ, ಸರ್ಕಾರೀ ಶಾಲೆಗಳೂ ‘ಪಬ್ಲಿಕ್’ ಆಗಲು ಏನು ಮಾಡಬೇಕೆಂದು ಕೇಳುವ ಸಮಯವೂ ಈಗಲೇ ಅನಿಸುತ್ತದೆ - ದೇಶದ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡುವಲ್ಲಿ ಸರ್ಕಾರೀ ಶಾಲೆಗಳ ಸಾಮರ್ಥ್ಯದ ಬಗ್ಗೆ ಬಹಳವೇ ಕಳವಳಗಳು ಹರಡಿರುವ ಈ ಸಮಯದಲ್ಲಿ. ವಿವಿಧ ಆಯ್ಕೆಗಳು, ಒಲವಿನ ಆದರ್ಶಗಳು ಮತ್ತು ತಮ್ಮ ಪ್ರತ್ಯೇಕತೆಯ ದ್ಯೋತಕಗಳುಳ್ಳ ಖಾಸಗೀ ಶಾಲೆಗಳು, ನಮ್ಮ ಶಿಕ್ಷಣ ವ್ಯವಸ್ಥೆಯ ‘ಸಾರ್ವಜನಿಕ’ ಮತ್ತು ‘ಖಾಸಗೀ’ ಆಶಯಗಳನ್ನು ಹೇಗೆ ಸರಿಹೊಂದಿಸುತ್ತವೆಂದು ನೋಡುವುದೂ ಇಂದಿನ ಅಗತ್ಯವೇ ಅನಿಸುತ್ತದೆ. ‘ನಾನಸೆನ್ಸ್ ವರ್ಸಸ್’ (ಅಸಂಗತ ಪದ್ಯಗಳು)ನ ಲೇಖಕ ಸುಕುಮಾರ್ ರೇ ಅವರ ಮಾತುಗಳ ರೀತಿಯಲ್ಲಿ ಹೇಳುವುದಾದರೆ ಉತ್ತರವಾಗಬಹುದೆನಿಸುತ್ತದೆ
‘‘ಹೆಸರು (ಶಾಲೆಯ) ನನ್ನದೆನ್ನುತ್ತಾರೆ ಅವರು, ನೀನದರ ಒಡೆಯನೋ ಎಂಬಂತೆ!
ಸ್ನೇಹಿತರೇ, ಆ ಹೆಸರೇ ಒಡೆಯ (ಶಾಲೆಯ). ಶಾಲೆಗಳ ಗುರುತಿಸುವುದೇ ಹಾಗೇ.”

ಅಲ್ಲಗಳೆಯಲಾಗದ ವಿಷಯವೆಂದರೆ, ವ್ಯಕ್ತಿಗಳ ಅಥವಾ ಸಂಸ್ಥೆಗಳ ಒಡೆತನದ್ದೋ ಎಂಬುದನ್ನೂ ಮೀರಿದ ಸಾಂಕೇತಿಕ ಪ್ರಾಮುಖ್ಯತೆಯನ್ನಂತೂ ಹೆಸರುಗಳು ಹೊಂದಿವೆ ಎಂಬುದು. ಮಾರುಕಟ್ಟೆಯ ಸಂಕೇತವಾದ ಐಹಿಕ ಮೌಲ್ಯಗಳನ್ನೋ ಅಥವಾ ಶಿಕ್ಷಣವಿರುವುದು ಸಮಾಜದ ಒಳಿತಿಗೆ ಎಂಬ ಸಾಂಸ್ಕೃತಿಕ ಮೌಲ್ಯಗಳನ್ನು ಉತ್ತೇಜಿಸುವ ಸಾಧ್ಯತೆಗಳನ್ನು ಶಾಲೆಯ ಹೆಸರುಗಳ ಆಯ್ಕೆಯೂ ಹೊಂದಿದೆ. ಭಾರತದ ಸರ್ಕಾರೀ ಮತ್ತು ಖಾಸಗೀ ಶಾಲೆಗಳೂ ಶಾಲೆಗೆ ಬೇರೆಯ ತೆರನಾದ ಹೆಸರುಗಳಿಡುವುದರಿಂದ ಶಿಕ್ಷಣದ ಉದ್ದೇಶಗಳಿಗೆ ಇನ್ನೂ ಹತ್ತಿರವಾಗಬಹುದೇನೋ ಎಂಬುದರೆಡೆಗೆ ಯೋಚನೆಯನ್ನು ಹರಿಸಬೇಕಿದೆ.

ರಾಹುಲ್ ಮುಖೋಪಾಧ್ಯಾಯ್ ( rahul.mukhopadhyay@apu.edu.in ) ಅವರು ಬೆಂಗಳೂರಿನ ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯದೊಂದಿಗಿದ್ದಾರೆ ಮತ್ತು ಅರ್ಚನ ಮೆಹೆಂದಳೇ ( archana.mehendale@tiss.edu ) ಅವರು ಮುಂಬೈನ ಟಾಟಾ ಸಾಮಾಜಿಕ ವಿಜ್ಞಾನ ಸಂಸ್ಥೆಯ ಸಂದರ್ಶಕ ಪ್ರಾಧ್ಯಾಪಕರಾಗಿದ್ದಾರೆ.

This particular translation is from:
http://www.parabaas.com/translation/database/translations/poems/sukumar_mustache.html